ಒಂದಾ ಲೆ 294)

# ಮಹಾಭಿನಿಷ್ಕ್ರಮಣ

(ಚಾರಿತ್ರಿಕ ಏಕಾಂಕ)

ಭಾಗ ೨



ರಚಯಿತ:
ಶ್ರೀ। ಎಂ. ಕೆ. ಬೇಲಕರ, ಮಧುರಕಾನನ.



1960

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು (ಇಂಡಿ

# ಈ ನಾಟಕವನ್ನು ಅಭಿನಯಿ ಗೆ
# ಸೂಚನೆ.

---

"ಮಹಾಭಿನಿಷ್ಕ್ರಮಣ" ನಾಟಕವನ್ನು ಎರಡು ಭಾಗಗಳಾಗಿ ಪ್ರಕಟಿಸಿರುವೆವು.

ಒಂದನೇ ಭಾಗದಲ್ಲಿ (ಪುಸ್ತಕ ನಂಬ್ರ 293), ರಾಜಕುಮಾರ ಸಿದ್ಧಾರ್ಥನು, ಜೀವನದಲ್ಲಿ ವೈರಾಗ್ಯ ತಾಳಿ, ಬೆಳಕನ್ನರಸಲು ಹೊರ ಡುವುದನ್ನಷ್ಟೆ ಚಿತ್ರಿಸಲಾಗಿದೆ. ಈ ಅಂಶವು, ಅರ್ಧ ಗಂಟೆಯೊಳ ಗಾಗಿ ಅಭಿನಯಿಸಲು ಬರುವಷ್ಟು ಇದೆ.

ಎರಡನೇ ಭಾಗದಲ್ಲಿ (ಪುಸ್ತಕ ನಂಬ್ರ 294), ಸಿದ್ಧಾರ್ಥನು ತಪೋವನ ಪ್ರವೇಶಮಾಡುತ್ತಾನೆ. ಸಿದ್ಧಾರ್ಥನ ಸಂಸಾರ ತ್ಯಾಗ ದಿಂದ ಅರಮನೆಯು ಶೋಕಸಾಗರವಾಗುತ್ತಿದೆ. ಈ ಅಂಶವೂ ಅರ್ಧ ಗಂಟೆಯ ಕಾಲ ಅಭಿನಯಿಸಲ್ಪಡಲು ತಕ್ಕುದಿದೆ.

ಒಂದು ಗಂಟೆಯ ಅವಧಿಯ ನಾಟಕವನ್ನಿಚ್ಛಿಸುವವರು ಇವ ರಡನ್ನೂ ಒಟ್ಟಿಗೇ ಅಭಿನಯಿಸಬಹುದು.

ಔಚಿತ್ಯವರಿತು ಹಿನ್ನೆಲೆ ಸಂಗೀತವನ್ನೊದಗಿಸುವುದರಿ ನಾಟಕವು ಹೆಚ್ಚು ಪರಿಣಾಮಕಾರಿಯಾಗಬಲ್ಲುದು.

—**ಕುಡ್ಪಿ ವಾಸುದೇವ ಶೆಣೈ**

# ಮಹಾಭಿನಿಷ್ಕ್ರಮಣ

## (ಚಾರಿತ್ರಿಕ ಏಕಾಂಕ)

## ಭಾಗ ೧

---

### ಪಾತ್ರ ಪರಿಚಯ:

1. ಶುದ್ಧೋದನ — ಕಪಿಲವಸ್ತುವಿನ ಅರಸ.
2. ಸಿದ್ಧಾರ್ಥ — ಶುದ್ಧೋದನನ ಪುತ್ರ, ಯುವರಾಜ.
3. ಮಂತ್ರಿ — ಶುದ್ಧೋದನನ ಅಮಾತ್ಯ.
4. ಛಂದಕ — ಸಿದ್ಧಾರ್ಥನ ಅಪ್ತಭೃತ್ಯ.
5. ಕಂಚುಕಿ — ರಾಜಭೃತ್ಯ.
6. ಬೇಡ — ಋಷ್ಯಾಶ್ರಮದ ಬಳಿ ಕಾಷಾಯವಸ್ತ್ರ ಧಾರಿಯಾಗಿ ಬೇಟೆಯಾಡುತ್ತಿದ್ದ ವಂಚಕ.
7. ಪ್ರಜಾಪತಿದೇವಿ — ಶುದ್ಧೋದನನ ಓರ್ವ ಪತ್ನಿ.
8. ಯಶೋಧರೆ — ಸಿದ್ಧಾರ್ಥನ ಧರ್ಮಪತ್ನಿ.

### ದೃಶ್ಯ ೨

[ಕಪಿಲವಸ್ತು ನಗರದ ಹೆಬ್ಬಾಗಿಲು. ಸಿದ್ಧಾರ್ಥ ಮತ್ತು ಛಂದಕರು ಅಶ್ವಗಳೊಂದಿಗೆ ನಿಂತಿರುವರು.]

ಸಿದ್ಧಾರ್ಥ: [ಕಪಿಲವಸ್ತು ನಗರಕ್ಕೆ ಕೈಮುಗಿದು]

ನನಗೆ ಇಷ್ಟು ದಿನಗಳ ತನಕ ಆಶ್ರಯವಾಗಿದ್ದ ವಿಶಾಲ ಕಪಿಲವಸ್ತು ನಗರವೇ! ನಿನಗಿದೋ ನನ್ನ ಹೃತ್ಪೂರ್ವಕ ವಂದನಂ! ಜನನ ಮರಣ ರೂಪದ ಸಂಸಾರದುಃಖದಿಂದ ನಿವೃತ್ತನಾಗುವ ಮಾರ್ಗವನ್ನು ಕಂಡು ಹಿಡಿದಲ್ಲದೆ ಪುನರಪಿ ಈ ನಗರ ಪ್ರವೇಶಮಾಡುವುದಿಲ್ಲ. ಇದು ನನ್ನ ಪ್ರತಿಜ್ಞೆ! ಅಷ್ಟದಿಕ್ಪಾಲಕರೂ, ಭೂಮ್ಯಾಕಾಶಗಳೇ ಇದಕ್ಕೆ ಸಾಕ್ಷಿ. (ಎಂದು ನಗರಕ್ಕೆ ಉದ್ದಂಡ ನಮಸ್ಕರಿಸುವನು.)

ಛಂದಕ: (ಸ್ವಗತಂ) ಅಯ್ಯೋ, ಇದೇನು ಪರಿವರ್ತನೆ? ಇದೇ ನನ್ನ ಸ್ವಾಮಿಗೆ ನಾನು ಸಲ್ಲಿಸುವ ಕೊನೆಯ ಸೇವೆಯೋ? ದೇವ ಜಗತ್ಪಾಲಕಾ, ನನಗೆ ನನ್ನ ಸ್ವಾಮಿಯ ಸಾನ್ನಿಧ್ಯ ಎಂದೆಂದಿಗೂ ನೀಡಲಾರೆಯಾ? (ಕಣ್ಣೀರಿಳಿಸುವನು).

ಸಿದ್ಧಾರ್ಥ: ಪ್ರಿಯ ಛಂದಕಾ, ಕಳವಳಿಸದಿರು (ಬೆನ್ನು ತಟ್ಟಿ) ತೀವ್ರವಾಗಿ ಭಾರ್ಗವಾಶ್ರಮದ ದಾರಿ ಹಿಡಿಯೋಣ! (ಕಂಥಕನ ಮೈದಡವಿ) ಕಂಥಕಾ, ಆಯಾಸವಾಯಿತೇ?

ಕಂಥಕ: (ಇಲ್ಲವೆಂದು ತಲೆಯಲ್ಲಾಡಿಸುತ್ತದೆ:)

ಸಿದ್ಧಾರ್ಥ: ಇಲ್ಲವೇ? ಹಾಗಿದ್ದರೆ ತೀವ್ರ ಹೊರಡು. (ತೆರೆ).

## ದೃಶ್ಯ ೮

(ಸೂರ್ಯೋದಯ ಸಮಯ. ಛಂದಕನೂ ಸಿದ್ಧಾರ್ಥನೂ ಕುದುರೆಗಳ ಮೇಲೆ ಪ್ರವೇಶ. ಜಿಂಕೆಗಳೂ ಹಕ್ಕಿಗಳೂ ಕಾಡು ಪ್ರಾಣಿಗಳೂ ನಿರಾತಂಕವಾಗಿ ಕಾಡಿನಲ್ಲಿ ಸಂಚರಿಸುತ್ತಿವೆ. ಭಾರ್ಗವಾಶ್ರಮದ ಸಮೀಪದ ಕಾಡು).

ಸಿದ್ಧಾರ್ಥ: ಛಂದಕಾ! ಅದೋ, ಉಷಃಗೀತಗಳು ಕೇಳುತ್ತಿವೆ. ಮೂಡಬಾನಂಗಣವು ರಕ್ತವರ್ಣವಾಗಿರುತ್ತದೆ. ಸೂರ್ಯೋದಯವೂ ಆಗಿ ಹೋಯಿತಲ್ಲಾ!

ಛಂದಕ: ಯುವರಾಜರೇ, ಇದೇನು? ಅಪರಿಚಿತರು ಬಂದರೂ ಇಲ್ಲಿಯ ಮೃಗ ಪಕ್ಷಿಗಳು ನಿರ್ಭಯವಾಗಿ ಸಂಚರಿಸುತ್ತಿವೆಯಲ್ಲಾ!

ಸಿದ್ಧಾರ್ಥ: ಅಹುದು ಛಂದಕಾ! ಇಲ್ಲಿಯ ಪ್ರಶಾಂತವೂ ರಮ್ಯವೂ ಆದ ವಾತಾವರಣ ನೋಡಿದರೆ ಇದೇ ಆಶ್ರಮಪ್ರದೇಶವೆಂದು ತೋರುತ್ತಿದೆ. (ಕುದುರೆಯಿಂದ ಇಳಿಯುವನು). ಕಂಥಕಾ! ಇನ್ನು ಮೇಲೆ ನಿನಗೆ ಶ್ರಮ ಕೊಡವುದಿಲ್ಲ. (ಅದರ ಮೈದಡವಿ) ನಿನ್ನನ್ನು ನಾನು ತೊಂದರೆಪಡಿಸುವುದು. ಇದುವೇ ಕೊನೆಯ ಸಾರಿ.

(ಶೋಕದಿಂದ ಕಂಥಕನು ಕಣ್ಣೀರಿಕ್ಕುವನು. ಛಂದಕನು ಶೋಕದಿಂದ ಸಿದ್ಧಾರ್ಥನ ಮುಖವನ್ನೇ ನೋಡುವನು.)

ಸಿದ್ಧಾರ್ಥ:! (ಸ್ನಿಗ್ಧ ಮಧುರದೃಷ್ಟಿಯಿಂದ) ಪ್ರಿಯ ಛಂದಕಾ! ಸ್ವಾಮಿಭಕ್ತಿಯು ನಿನ್ನ ದೃಷ್ಟಿಯಲ್ಲಿ ಅಚ್ಚೊತ್ತಿದಂತಿದೆ. ನೀನು ಇದು ತನಕ ಸಲ್ಲಿಸಿದ ಸೇವೆಯಿಂದ ಸಂತುಷ್ಟನಾಗಿರುತ್ತೇನೆ. ಆದರೆ ಕೇಳು. ಸ್ವಾಮಿಭಕ್ತಿಯಿಲ್ಲದ ಸಾಮರ್ಥ್ಯವಂತರಾದ ಸೇವಕರನ್ನೂ, ಸಾಮರ್ಥ್ಯವಿಲ್ಲದ ಸೇವಕರನ್ನೂ ನಾನು ಅಸಂಖ್ಯಾತವಾಗಿ ಕಂಡುದುಂಟು. ಆದರೆ ಸಾಮರ್ಥ್ಯವೂ ಸ್ವಾಮಿಭಕ್ತಿಯೂ ಎರಡೂ ಇರತಕ್ಕ ನಿನ್ನಂತಹವರನ್ನು ಕಾಣುವುದು ದುರ್ಲಭವೇ ಸರಿ.

ಛಂದಕ: (ತಲೆತಗ್ಗಿಸಿ) ನಿಮ್ಮ ಕೃಪೆ ಯುವರಾಜಾ!

ಸಿದ್ಧಾರ್ಥ: (ತನ್ನ ಕೊರಳಿನಿಂದ ಅನರ್ಘ್ಯ ಅಭರಣ ತೆಗೆದು) ಛಂದಕಾ! ತೆಗೆದುಕೋ ಇದೋ. ಇದು, ನಿನಗೆ ನನ್ನ ಮೆಚ್ಚಿನ ಕಾಣಿಕೆ. ಇನ್ನು ನೀನು ಊರಿಗೆ ಹಿಂತೆರಳು—ಸುಖವಾಗಿ ಬಾಳು.

ಛಂದಕ: (ಕಣ್ಣೀರಿಕ್ಕಿ) ಪ್ರಭುವೇ....ಪ್ರಭುವೇ....ನಿನ್ನ ಮಾತಿಗೆ ನಾನೆಂದೂ ಪ್ರತಿಯಾಡಿದವನಲ್ಲ. ಕಾರುಣ್ಯಮೂರ್ತಿಯಾದ ನೀನು ನನ್ನ ಅಲ್ಪಸೇವೆಗೇ ಮೆಚ್ಚಿದುದು ಆಶ್ಚರ್ಯವಲ್ಲ. ಆದರೆ....ಆದರೆ....ಪ್ರಭುವೇ

ಸಿದ್ಧಾರ್ಥ: ಸಂದೇಹವೇನು? ಛಂದಕಾ, ಹೇಳು.

ಛಂದಕ: (ದೀನನಾಗಿ ಸಿದ್ಧಾರ್ಥನನ್ನು ನೋಡಿ) ಪ್ರಭುವೇ, ನೀವು ಪಯಣಮಾಡುವುದೆಲ್ಲಿಗೆ?

ಸಿದ್ಧಾರ್ಥ: ಇಷ್ಟೇ ತಾನೇ? (ಅವನ ಭುಜ ಹಿಡಿದು) ಛಂದಕಾ! ನಾನು ಜನನ-ಮರಣಗಳಿಂದ ಪಾರಾಗುವ ಪರಮಾರ್ಥವನ್ನು ಸಾಧಿಸಲು ತಪೋವನಕ್ಕೆ ತೆರಳುವೆನು.

ಛಂದಕ: (ಕಣ್ಣೀರಿಕ್ಕಿ ಕಾಲಿಗೆ ಬಿದ್ದು) ಪ್ರಭುವೇ, ಬೇಡ. ಖಂಡಿತ ವಾಗಿಯೂ ಬೇಡ! ನಿಮ್ಮ ಈ ಬಗೆಯ ಸಂಕಲ್ಪವನ್ನು ಕಂಡು ಕಬ್ಬಿಣದ ಹೃದಯವೂ ಕರಗಿ ನೀರಾಗುವುದು. ಅಂತಃಪುರದಲ್ಲಿ ಹಂಸತೂಲಿಕಾ ತಲ್ಪದಲ್ಲಿ ಪವಡಿಸುತ್ತಿದ್ದ ಪ್ರಭುವಿಗೆ ಇನ್ನು ಮುಂದೆ ದರ್ಭಶಯನವೇ? ಮೆತ್ತನೆಯ ರತ್ನಗಂಬಳಿಯಲ್ಲಿ ನಡೆಯುತ್ತಿದ್ದ ಈ ಕೋಮಲ ಪಾದಗಳಿಗೆ ಇನ್ನು ಮುಂದೆ ಕಲ್ಲುಮುಳ್ಳುಗಳ ದಾರಿಯೇ? ಅಯ್ಯೋ (ಅಳುತ್ತಾ) ಇಲ್ಲ ಪ್ರಭೋ! ನಾನಂತೂ ಕಪಿಲವಸ್ತುವಿಗೆ ಹೋಗಲಾರೆ. ನಿಮ್ಮನ್ನು ಸೇವಿಸುತ್ತಾ ನಿಮ್ಮ ಬಳಿಯಲ್ಲಿಯೇ ನಿಲ್ಲುವೆನು.

ಸಿದ್ಧಾರ್ಥ: (ಛಂದಕನನ್ನು ಹಿಡಿದೆತ್ತಿ) ಛಂದಕಾ! ಎದ್ದೇಳು. ಫಲವು ಲಭಿಸುವ ಸಮಯ ಆದರದಿಂದ ಕಾಣುವವರು ಬಹುಮಂದಿ. ಆದರೆ ಆಶ್ರಮವಾಸಿಯಾಗುವ ಸ್ವಾಮಿಯನ್ನು ಪ್ರೀತಿಸುವ ಮತ್ತು ತಪೋವನದಲ್ಲೇ ವಾಸಿಸುವೆನೆಂಬ ನಿನ್ನಂತಹ ಪ್ರಿಯ ಸೇವಕರು ಅತೀ ವಿರಳ. ಆಶೆಯಿಂದ ಕೂಡಿಯೇ ಜನರು ಪ್ರೀತಿಗೌರವಗಳನ್ನು ತೋರಿಸುವುದು ಲೋಕದಲ್ಲಿ ವಾಡಿಕೆ. ಸಾಮಾನ್ಯವಾಗಿ ತಂದೆಯು ಕುಲಾಭ್ಯುದಯದ ಆಸೆಯಿಂದ ಮಕ್ಕಳನ್ನು ಸಾಕುತ್ತಾನೆ. ತಮಗೆ ಪೋಷಣೆ ದೊರೆಯುವುದೆಂಬ ಆಸೆಯಿಂದ ಪುತ್ರರು ಪ್ರೀತಿಗೌರವಗಳನ್ನು ಪ್ರದರ್ಶಿಸುತ್ತಾರೆ. ಹೀಗಿರುತ್ತಾ ನನ್ನಿಂದ ಯಾವುದೊಂದು ಪ್ರಯೋಜನಾಕಾಂಕ್ಷೆಗೆ ಅವಕಾಶವಿಲ್ಲದ ಈ ಸ್ಥಿತಿಯಲ್ಲಿ ನೀನು ನನ್ನೊಡನೆ ನಿಲ್ಲುವ ವಾರ್ತೆ ಕೇಳಿ ಸಂತುಷ್ಟನಾದೆನು. ಆದರೆ ಛಂದಕಾ! ನೀನು ನನ್ನ ಸಂಗಡ ನಿಲ್ಲದೇ ಕಂಥಕನೊಡನೆ ಕಪಿಲವಸ್ತುವಿಗೆ ಹಿಂತಿರುಗಬೇಕು.

ಛಂದಕ: (ಗದ್ಗದಿತನಾಗಿ) ಪ್ರಭುವೇ! ಕಂಥಕನನ್ನು ನಿಮ್ಮ ಬಳಿಗೆ ತರುವಂತೆ ನೀವು ಆಜ್ಞಾಪಿಸಿದಾಗ ಹತಭಾಗ್ಯನಾದ ನಾನು ನನ್ನ ದುರದೃಷ್ಟ ವಶದಿಂದಲೇ ಮೌನವಾಗಿ ಅದನ್ನು ನಿಮ್ಮ ಬಳಿಗೆ ತಂದೆನೆಂದು ತೋರುತ್ತದೆ. ಪ್ರಭುವೇ ನಾನೇ ನಿಮ್ಮನ್ನು ಕಾಡಿಗೆ ತಂದು ಬಿಟ್ಟು, ಕಂಥಕನೊಡನೆ ಹೇಗೆತಾನೇ ಊರಿಗೆ ಹಿಂತಿರುಗಲಿ? ಇಲ್ಲ, ನಾನು ನಿಮ್ಮೊಂದಿಗೆ ಇಲ್ಲೇ ಇರುವೆನು.

ಸಿದ್ಧಾರ್ಥ: ಹಾಗನ್ನಬೇಡ ಛಂದಕಾ! ನೀನು ಉತ್ತಮ ಕೆಲಸಕ್ಕೆ ಹೊರಟ ನನಗೆ ಸಹಾಯಕನಾದೆಯೇ ಹೊರನು ಬೇರಲ್ಲ. ದುಃಖಿಸಬೇಡ ಪ್ರಿಯ ಛಂದಕಾ!

ಛಂದಕ: ಇಲ್ಲ ಒಡೆಯಾ! ಒಡಲಿನ ದುಃಖವನ್ನು ಹೇಗೆ ಹತ್ತಿಕ್ಕಲಿ? ಉಕ್ಕಿ ಬರುವ ದುಃಖವನ್ನು ಸೈರಿಸಲಾರದೆ ಅಳತೆಗೆಟ್ಟು ನುಡಿಯುತ್ತಿರುವ ಈ ಹತಭಾಗ್ಯನ ದೈನ್ಯಾಲಾಪಕ್ಕಾಗಿ ಮನ್ನಿಸಿರಿ ಪ್ರಭೋ! ನಿಮ್ಮ ಪಾದಗಳೇ ನನಗೆ ಗತಿ. ಹಿಂದೆ ಸುಮಂತ್ರನು ರಾಘವನನ್ನು ಅರಣ್ಯದಲ್ಲಿ ಬಿಟ್ಟು ಅಯೋಧ್ಯೆಗೆ ತೆರಳಿದಂತೆ ನಾನೂ ನಿಮ್ಮನ್ನು ಅರಣ್ಯದಲ್ಲಿ ಬಿಟ್ಟು, ಕಪಿಲವಸ್ತುವಿಗೆ ಹೋಗುವಂತೆ ಮಾಡಬೇಡಿರಿ ಪ್ರಭೋ! ನಾನು ರಾಜದಂಪತಿಗಳಿಗೂ, ಯುವರಾಣಿಯವರಿಗೂ, ಪುರಜನರಿಗೂ ಏನೆಂದು ಉತ್ತರ

ಹೇಳಲಿ? ನೀವೇ ನನಗೆ ತಂದೆ-ತಾಯಿ-ಬಂಧು-ಬಳಗ ಸರ್ವಸ್ವವೂ ನೀವೇ. ನಾನು ನಿಮ್ಮ ಬಳಿ ಇರಲು ಅನಜ್ಞೆಕೊಟ್ಟು ಕಾಪಾಡಿರಿ. (ಅಳುವನು)

ಸಿದ್ಧಾರ್ಥ: ಛಂದಕಾ! ನನ್ನ ವಿಯೋಗವನ್ನು ಕುರಿತು ಸಂತಾಪ ಪಡದಿರು. ಪರಮಾರ್ಥ ಸಾಧನೆಯ ಪ್ರಯತ್ನಕ್ಕಾಗಿ ಈಗೊಂದು ವೇಳೆ ನಾನು ಬಂಧುಗಳನ್ನು ಅಗಲಲಾರದೆ ಸುಮ್ಮನಿದ್ದರೂ, ಮುಂದೆ ಮೃತ್ಯುವು ಅಗಲಿಕೆಯನ್ನುಂಟುಮಾಡಿಯೇ ತೀರುವುದು. ಯಾವ ಪೂಜ್ಯಳಾದ ಮಾಯಾದೇವಿಯು ಅತ್ಯಂತ ಆಶೆಯಿಂದ ನನ್ನನ್ನು ನೋಡಿ ಹಿಗ್ಗಿದಳೋ ಆ ನನ್ನ ಜನನಿ ಈಗೆಲ್ಲಿ? ಅವಳಿಗೆ ನನ್ನಿಂದ ಆದ ಉಪಕಾರವೇನು? ಪಕ್ಷಿಗಳು ಒಂದು ವೃಕ್ಷದಲ್ಲಿ ರಾತ್ರಿಯನ್ನು ಕಳೆದು ಬೆಳಗಾಗುತ್ತಲೇ ದೂರ ಸರಿವಂತೆ ನಮ್ಮ ಬಾಳೂ ಕ್ಷಣಿಕವಾದುದು. ಕೊಕ್ಕರೆಗಳು ಒಂದರೊಡನೊಂದು ಒಡನಾಡುತ್ತಿದ್ದು ಆ ಬಳಿಕ ಅಗಲಿ ತೆರಳುವಂತೆ ಸ್ವಪ್ನಸದೃಶವಾದ ಈ ಜೀವನದಲ್ಲಿ ಮಾನವರ ಗತಿಯೂ ಇಷ್ಟೇ. ಛಂದಕಾ! ಆಲೋಚಿಸು. ಈ ಅಂಶಗಳನ್ನು ಚೆನ್ನಾಗಿ ಯೋಚಿಸು. ಅದುದರಿಂದ ನೀನು ಕಪಿಲವಸ್ತು ನಗರಕ್ಕೆ ಹಿಂತಿರುಗಿ ಆ ತರುವಾಯವೂ ಸ್ನೇಹವು ಬಾಧಿಸಿದರೆ ಮತ್ತೆ ನನ್ನ ಬಳಿಗೆ ಬಾ.

ಛಂದಕ: ಸ್ವಾಮಿ, ನಿಮ್ಮ ಮಾತನ್ನು ನಾನೆಂತು ಮೀರಲಿ? ಮತ್ತೆ ಬರಲು ಕೃಪೆದೋರಿದಿರಲ್ಲಾ; ಅದೇ ಸಾಕು. (ತನಗೆ ತಾನೇ) ಛಂದಕಾ! ಸ್ವಾಮಿಭಕ್ತನಾದ ನೀನೇ ಧನ್ಯನು.

ಸಿದ್ಧಾರ್ಥ: ಛಂದಕಾ! ನಾನು ದಂಡ ಪ್ರಣಾಮಗಳೊಂದಿಗೆ ಈ ರೀತಿ ಬಿನ್ನೈಸಿದೆನೆಂದು ತಂದೆಯವರಿಗೆ ಹೇಳು. "ನಾನು ಜರಾಮರಣ ನಾಶನಾರ್ಥವಾಗಿ ತಪೋವನ ಪ್ರವೇಶಿಸಿರುವೆನೇ ಹೊರತು—ಸ್ವಾರ್ಥಾಪೇಕ್ಷೆಯಿಂದಾಗಲೀ, ಕೋಪದಿಂದಾಗಲೀ, ಪಿತೃಭಕ್ತಿಯಿಲ್ಲದೆಯಾಗಲೀ ಹಾಗೆ ಮಾಡಿದವನಲ್ಲ ಲೋಕತ್ಯಾಗಕ್ಕಾಗಿಯೇ ಹೊರಟು ಬಂದಿರುವ ನನ್ನನ್ನು ಕುರಿತು ತಾವಾರೂ ಶೋಕಿಸಕೂಡದು. ನನಗಾಗಿ ದುಃಖಿಸಬೇಕಾಗಿಲ್ಲನೆಂದೂ ಬಿನ್ನೈಸುತ್ತೇನೆ ತಮ್ಮಿಂದ ರಾಜ್ಯವನ್ನು ಸ್ವೀಕರಿಸಿ ಅರ್ಥ ದಾಯಾದನೆನಿಸುವುದಕ್ಕಿಂತ ಶುದ್ಧಾತ್ಮರಾದ ತಮ್ಮ ಧರ್ಮವೃತ್ತಿಯನ್ನೇ ಅನುಕರಣಮಾಡಿ ಧರ್ಮದಾಯಾದನೆನಿಸಲು ವನಪ್ರವೇಶಮಾಡಿದ್ದೇನೆ. ಆದರೆ, ತಪೋವೃತ್ತಿಗೆ ಇದು ಸಕಾಲವಲ್ಲದಿರಬಹುದು. ಚಂಚಲ

ವಾದ ಮಾನವಜೀವನದಲ್ಲಿ ಧರ್ಮಾಚರಣೆಗೆ ಅಕಾಲವೆಂಬುದೇ ಇಲ್ಲ. ಆದಕಾರಣ ಶ್ರೇಯಸ್ಸಾಧನೆಗೆ ನನಗೆ ಇದೇ ಸಕಾಲವೆಂದು ಭಾವಿಸಿ ರಾಜಧಾನಿಯನ್ನು ಬಿಟ್ಟು ಬಂದೆನು  ಮರಣಭೀತಿಯು ಸತತವೂ ನಮ್ಮ ಮನಸ್ಸನ್ನಾವರಿಸಿ ಮೃತ್ಯುವು ಸಿದ್ಧವಾಗಿರುವಲ್ಲಿ ಜೀವನದಲ್ಲಿ ನಂಬಿಕೆಯನ್ನಿಡುವ ಬಗೆ ಹೇಗೆಂಬುದನ್ನರಿಯದೆ ಹೊರಟು ಬಂದೆ." ಛಂದಕಾ! ತಂದೆಯವರಿಗೆ ಈ ಮಾತನ್ನು ವಿಜ್ಞಾಪಿಸು. ಛಂದಕಾ! ನಿನ್ನ ಖಡ್ಗವನ್ನು ಇಲ್ಲಿ ತಾ!

(ಖಡ್ಗವನ್ನು ಒರೆಯಿಂದ ಹಿರಿದು ಕೇಶಖಂಡನ ಮಾಡಿಕೊಳ್ಳುವನು. ಆಗ ಕಾಷಾಯವಸ್ತ್ರ ಧರಿಸಿದ ಬೇಡನೊಬ್ಬನು ಪ್ರವೇಶಿಸುವನು )

ಸಿದ್ಧಾರ್ಥ: (ಬೇಡನಿಗೆ) ಇದೇನು ಈ ವಿಚಿತ್ರ ವ್ಯಾಪಾರ? ಋಷಿಯೋಗ್ಯವೆನಿಸಿ ಮಂಗಳಕರವಾಗಿರುವ ಕಾಷಾಯವಸ್ತ್ರಗಳನ್ನು ಧರಿಸಿರುವುದೇನು? ಸಾಧುವೃತ್ತಿ ಸೂಚಕವಲ್ಲದ ಧನುರ್ಬಾಣಗಳನ್ನು ಹಿಡಿದು ಹೊರಟಿರುವುದೇನು? ಇವೆರಡೂ ಅಸಂಗತವಲ್ಲವೇ?

ಬೇಡ: ಈ ಆಶ್ರಮ ಪ್ರದೇಶದಲ್ಲಿ ಮೃಗಪಕ್ಷಿ ಹರಿಣಗಳು ಕಾಷಾಯವಸ್ತ್ರಧಾರಿಗಳನ್ನು ಕಂಡರೆ ನಿರಾತಂಕವಾಗಿ ಸಮೀಪಕ್ಕೆ ಬರುವಷ್ಟು ಸಲಿಗೆಯು ಬೆಳೆದಿದ್ದ ಕಾರಣ, ಅನಾಯಾಸವಾಗಿ ಹರಿಣ ಮುಂತಾದವನ್ನು ಕೊಲ್ಲಬಹುದೆಂದು ನಾನು ತಪಸ್ವೀ ವೇಷದಿಂದ ಇಲ್ಲಿಗೆ ಬಂದಿರುವೆನು

ಸಿದ್ಧಾರ್ಥ: (ಕಿವಿ ಮುಚ್ಚಿ) ಶಾಂತಂ ಪಾಪಂ!; (ಸ್ವಗತಂ) ಅಯ್ಯೋ, ಇವನು ಎಂತಹ ಘೋರ ಕೃತ್ಯಕ್ಕೆ ಮನಮಾಡಿರುವನು! ಅದಕ್ಕೆ ಅವಕಾಶವನ್ನು ತಪ್ಪಿಸುವುದರ ಜೊತೆಗೆ ಅವನಿಂದ ಕಾಷಾಯ ವಸ್ತ್ರವನ್ನು ಪಡೆಯಬಹುದು. (ಬೇಡನಿಗೆ) ಎಲೌ ಬೇಡನೇ! ನನ್ನ ವಸ್ತ್ರಗಳಿಗೆ ಪ್ರತಿಯಾಗಿ ನಿನ್ನವುಗಳನ್ನು ಕೊಡುವೆಯಾ?

ಬೇಡ: (ಆಸೆಯಿಂದ) ಆಹಾ, ನಿಜವೇ? ಕಾಂಚನಹಂಸಚಿತ್ರಿತವಾದ ಅಮೂಲ್ಯವಾದ ಶ್ವೇತವಸ್ತ್ರಗಳಿಗೆ ಯಾರು ತಾನೇ ಮನಸೋಲರು?

ಸಿದ್ಧಾರ್ಥ:(ಬೇಡನಿಗೆ ಶ್ವೇತ ವಸ್ತ್ರ ನೀಡುತ್ತಾ) ಇದೋ ತೆಗೆದುಕೋ! ಇನ್ನಾದರೂ ಹಿಂಸೆಯ ವೃತ್ತಿಯನ್ನು ಬಿಡುವುದು ಸಾಧ್ಯವಿಲ್ಲದಿದ್ದರೆ ಮೋಸದಿಂದ ವರ್ತಿಸುವುದನ್ನಾದರೂ ಬಿಡಬೇಕು.

ಬೇಡ: (ಕಾಷಾಯವಸ್ತ್ರ ನೀಡಿ) ಇಲ್ಲ ಒಡೆಯಾ, ಇನ್ನು ಇಂತಹ ಕೃತ್ಯಕ್ಕೆ ಮನಮಾಡಲಾರೆ. ದಯವಿಟ್ಟು ಕ್ಷಮಿಸು.

ಸಿದ್ಧಾರ್ಥ: ಎದ್ದೇಳು. ಉತ್ತಮ ಆಚರಣೆಗಳಿಂದ ಸತ್ಕೀರ್ತಿ ಗಳಿಸು. (ಬೇಡನು ಎನ್ನು ತಲೆತಗ್ಗಿಸಿಕೊಂಡೇ ತೆರಳುವನು).

ಕಂಥಕಾ, ಇನ್ನು ನೀನು ಕಪಿಲವಸ್ತುವಿಗೆ ಹಿಂತಿರುಗು (ಎಂದು ಅದನ್ನು ಮುದ್ದಿಸಿ, ಛಂದಕನ ಬೆನ್ನು ತಟ್ಟಿ) ಛಂದಕಾ, ಊರಿಗೆ ಹಿಂತೆರಳು. ಕಂಥಕನನ್ನು ಪ್ರೀತಿಯಿಂದ ಕಾಯುತ್ತಿರು. ಬೇಡನಂತೆ ಘೋರಕೃತ್ಯ ವೆಸಗುವವರಿಗೆ ಸದ್ಬೋಧನೆಯನ್ನು ನೀಡು. ನಾನಿದೋ ತಪೋವನ ಪ್ರವೇಶಿಸುವೆನು.

(ಕಂಥಕ ಹಾಗೂ ಛಂದಕ ಇಬ್ಬರೂ ಪ್ರಣಾಮಮಾಡುವರು).

ಸಿದ್ಧಾರ್ಥ: (ಛಂದಕನನ್ನು ಹಿಡಿದೆತ್ತಿ) ಎದ್ದೇಳಿ, ಎದ್ದೇಳಿ. ಸತ್ಕೀರ್ತಿ ಗಳಿಸಿರಿ. ನಾನೀಗಲೆ ಭಾರ್ಗವಾಶ್ರಮ ಪ್ರವೇಶಿಸಿ ತಪಸ್ಸನ್ನಾಚರಿಸಲು ತೆರಳುವೆನು (ತೆರಳುವನು). (ಕಂಥಕ ಮತ್ತು ಛಂದಕರು, ಸಿದ್ಧಾರ್ಥನು ಹೋದ ದಾರಿಯನ್ನೇ ನೋಡಿ, ಕೊನೆಗೆ ಛಂದಕನು ಕಂಥಕನನ್ನು ಅಪ್ಪಿ ಕೊಂಡು ಅಳುತ್ತಾ)

ಛಂದಕ: ಅರಮನೆಯಲ್ಲಿ ದಿವ್ಯಾಲಂಕಾರ ಭೂಷಿತನಾಗಿ ರಾಜ ಭೋಗವನ್ನನುಭವಿಸುತಿದ್ದ ನನ್ನ ಪ್ರಭುವು ಬೇಡನೊಬ್ಬನು ಕೊಟ್ಟ ಕಾಷಾಯವಸ್ತ್ರವನ್ನು ಧರಿಸಿ ಭಿಕ್ಷುಕನಂತೆ ಆಶ್ರಮದ ಕಡೆಗೆ ಹೊರಟು ಹೋದನಲ್ಲಾ! ಕಂಥಕಾ! ದೇವರಂತಿರುವ ಸ್ವಾಮಿಯನ್ನು ಕಳಕೊಂಡ ನಮ್ಮಂತಹ ದೌರ್ಭಾಗ್ಯವಂತರು ಇನ್ನಾರಿರುವರು? ತೆರಳು ಕಂಥಕಾ! ಎಂತಾದರೂ ಕಪಿಲವಸ್ತು ಕಾಣಬೇಕಲ್ಲ. (ತೆರಳುವರು).

(ತೆರೆ)

## ದೃಶ್ಯ ೯

(ಕಪಿಲವಸ್ತುವಿನ ರಾಜಧಾನಿ. ಶುದ್ಧೋದನನೂ ಮಂತ್ರಿಯೂ ಕುಳಿತಿರುವರು.)

ಶುದ್ಧೋದನ: (ಹಲ್ಲಿ ಗೊಣಗುಟ್ಟುವುದನ್ನು ಕೇಳಿ) ಇದೇನು ಅಮಾತ್ಯರೇ? ಅಮಂಗಳ ಸೂಚನೆ?

ಕಂಚುಕಿ: (ಓಡಿಬಂದು) ಬುದ್ಧೀ, ಅಂತಃಪುರದಾಗೇ ಯುವರಾಜರಿಲ್ಲ ಬುದ್ಧೀ....ಎಲ್ಲಿ ಓದರೋ ಗೊತ್ತಿಲ್ಲ. ಅರಮನೆಯೆಲ್ಲ ಹುಡುಕಾಡಿದ್ರೂ ಕಾಣಲಿಲ್ಲ ಯುವರಾಣಿಯವ್ರೂ ಮಹಾರಾಣಿಯವ್ರೂ ಗೋಳೋ ಎಂದು ಅಳುತ್ತಾರೆ ಬುದ್ಧೀ.

ಶುದ್ಧೋದನ: ಅಯ್ಯೋ, ಕೇಳಲಾರೆ! ಛಂದಕನನ್ನು ವಿಚಾರಿಸಿದೆಯಾ?

ಕಂಚುಕಿ: ಛಂದಕನೂ, ಯುವರಾಜಪ್ರೀಯ ಕಂಥಕನೂ ಇಲ್ಲ ಮಹಾಪ್ರಭೋ.

ಮಂತ್ರಿ: ಇಬ್ಬರೂ ಇಲ್ಲವೇ?

ಕಂಚುಕಿ: ಎಲ್ಲ ಓದ್ರೋ ನಂಗೊತ್ತಿಲ್ಲ ಬುದ್ಧೀ.

ಶುದ್ಧೋದನ: ಈಗಲೇ ತೆರಳಿರಿ. ಸಕಲ ದಿಕ್ಕನ್ನೂ ಹುಡುಕಿರಿ.

ಕಂಚುಕಿ: ಅಪ್ಪಣೆ ಮಹಾಪ್ರಭೋ (ತೆರಳುವನು.)

ಶುದ್ಧೋಧನ: ಅಮಾತ್ಯರೇ, ಕುಮಾರನು ತಪೋವನಕ್ಕೆ ತೆರಳಿರಬಹುದೇ? ನನ್ನ ಪ್ರಿಯಪುತ್ರನು ನನ್ನನ್ನಗಲಿರಬಹುದೇ? ಇಲ್ಲ, ಖಂಡಿತವಾಗಿಯೂ ಇಲ್ಲ (ಎದ್ದು ನಿಂತು) ದೇವಾ ಶಾಖ್ಯವರ್ಧನ, ನನ್ನ ಕುಮಾರ ಶರೀರವನು ಸುರಕ್ಷಿತನಾಗಿ ಹಿಂತಿರುಗಲಿ. ನಾನಿದೋ, ಇಂದಿನಿಂದಲೇ ಉಪವಾಸವ್ರತವನ್ನು ಕೈಕೊಂಡಿರುವೆನು. ಮಗನ ಸೌಖ್ಯ ಸಮಾಚಾರವು ನನಗೆ ತಲುಪಲಿ. ಅಮಾತ್ಯರೇ, ಜಪತಪಹೋಮನೇಮಗಳ ಆಚರಣೆಗಾಗಿ ನನಗೀಗಲೇ ಶಾಖ್ಯವರ್ಧನ ದೇವಾಲಯಕ್ಕೆ ದಾರಿ ತೋರಿಸಿರಿ.

ಮಂತ್ರಿ: ಹಾಗೆಯೇ ಆಗಲಿ. (ತೆರಳುವರು.) (ತೆರೆ.)

## ದೃಶ್ಯ ೧೦

(ಶಾಖ್ಯವರ್ಧನ ದೇವಸ್ಥಾನ. ಶುದ್ಧೋದನನ ಮಂಗಳ ಹೋಮವನ್ನು ಪೂರೈಸುವನು.)

ಶುದ್ಧೋದನ: (ಮಂಗಳಾರತಿ ಮಾಡಿ) ಅನವರತ ಮೂರು ದಿನಗಳಿಂದ ದೀಕ್ಷಾಬದ್ಧನಾಗಿ ಜಪತಪ ಹೋಮನೇಮಗಳನ್ನು ಮಾಡಿದರೂ ಪುತ್ರನ ಕುರಿತಾದ ಯಾವುದೊಂದೂ ಮಂಗಳ ಸಮಾಚಾರವೂ ದೊರಕ

ಲಿಲ್ಲ. ಶಾಕ್ಯದೇವಾ! ಪುತ್ರನು ಸುಖದಲ್ಲಿರುವನೆಂಬ ಮಂಗಳ ಸಮಾಚಾರವನ್ನು ಇಂದಾದರೂ ತಿಳಿಸಬಾರದೇ?

ಮಂತ್ರಿ: ಮೂರು ದಿನಗಳಿಂದ ಅಂತಃಪುರದ ಸ್ತ್ರೀಜನರ ಸಮಾಚಾರವೇ ಇಲ್ಲ. ಪ್ರಜಾಜನರಾದರೋ "ಯುವರಾಜರೆಲ್ಲಿ? ಯುವರಾಜರೆಲ್ಲಿ?" ಎಂದು ಗೋಳ್ಗರೆಯುತ್ತಿರುವರು. ಕೈಕೊಂಡ ವ್ರತವು ಇಂದಿಗೆ ಪೂರೈಸಿತಲ್ಲ. ಅಂತಃಪುರದಲ್ಲಿ ಶೋಕಸಂತಪ್ತರಾದ ಮಹಾರಾಣಿ, ಯುವರಾಣಿಯರಿಗೆ ಪ್ರಸಾದವಿತ್ತು ಯೋಗಕ್ಷೇಮ ವಿಚಾರಿಸಬೇಡವೇ?

ಶುದ್ಧೋದನ: ಅಹುದು ಅಮಾತ್ಯರೇ. ಪುತ್ರವಿರಹ ಶೋಕದಿಂದ ಮಂಕು ಕವಿದಂತಾಗಿದೆ. ಅಂತಃಪುರದ ಸ್ತ್ರೀಜನರ ಹಾಗೂ ಪ್ರಜಾಜನರ ಯೋಗಕ್ಷೇಮ ವಿಚಾರಿಸಲು ಈಗಲೇ ತೆರಳೋಣ. ನಡೆಯಿರಿ. (ತೆರೆ.)

## ದೃಶ್ಯ ೧೧

(ಅಂತಃಪುರ. ಪ್ರಜಾಪತೀದೇವಿ, ಯಶೋಧರೆ, ದಾದಿಯರು ಇರುವರು.)

ಯಶೋಧರೆ: ಅತ್ತೆಮ್ಮಾ, ವೈಶಾಖ ಶುದ್ಧ ಹುಣ್ಣಿಮೆಯ ದಿನ ಹೋದ ಪತಿದೇವರು ಇನ್ನೂ ಏಕೆ ಬರಲಿಲ್ಲ? ಎಲ್ಲಿ ಹೋದರೆಂದು ನನಗೆ ಹೇಳಬಾರದೇ?

ಪ್ರಜಾಪತಿದೇವಿ: ಎಲ್ಲಿ ಹೋದನೋ? ಏನಾಯಿತೋ? ದೇವರೇ ಬಲ್ಲ. ಈಗ ಮೂರು ದಿನದಿಂದ ಅವರು ಯಾವುದೋ ವ್ರತದಲ್ಲಿರುವರಂತೆ. ಶಾಕ್ಯವರ್ಧನ ದೇವಾಲಯ ಬಿಟ್ಟು ಕದಲುವುದಿಲ್ಲವಂತೆ. (ಒಳಗಿನಿಂದ ರಾಹುಲನು ಅಳುವನು ) ಯಶೋಧಾ, ನೋಡು, ಪುಟ್ಟ ರಾಹುಲನು ಅಳುತ್ತಿರುವನು—ಅವನನ್ನು ಮಲಗಿಸು. (ಯಶೋಧರೆ ತೆರಳುವಳು.)

ಕಂಚುಕಿ: ಅಮ್ಮಾ! ಅಮ್ಮಾ! ಛಂದಕನು ಬರುತ್ತಿರುವನು.

ಪ್ರಜಾಪತಿದೇವಿ: ಛಂದಕನೇ? ಬೇಗನೇ ಕರೆದು ತಾ!

ಕಂಚುಕಿ: ಅಪ್ಪಣೆ.

ಪ್ರಜಾಪತಿದೇವಿ: ಕುಮಾರಕಂಠೀರವನೂ ಬಂದಿರಬಹುದೇ?

(ಕಂಚುಕಿ ಮತ್ತು ಛಂದಕರು ಬರುವರು.)

ಛಂದಕಾ! ಛಂದಕಾ! ಕುಮಾರಕಂಠೀರವನೆಲ್ಲಿ?

ಛಂದಕ: ಅಮ್ಮಾ...............

ಯಶೋಧರೆ: (ಪ್ರವೇಶಿಸಿ) ಛಂದಕನೇ? ಛಂದಕಾ! ಛಂದಕಾ! ನನ್ನ ಪ್ರೇಮಮೂರ್ತಿಯೆಲ್ಲಿರುವರು? ಹೇಳು ಛಂದಕಾ! ಹೇಳು.

ಛಂದಕ: ಅಮ್ಮಾ... ಅವರು ಜರಾಮರಣನಾಶನಾರ್ಥವಾಗಿ ಕಾಡಿಗೆ ತೆರಳಿದರು. (ಅಳುವನು.)

ಯಶೋಧರೆ: ನನ್ನ ಪ್ರೇಮಮೂರ್ತಿ ಕಾಡಿಗೆ ತೆರಳಿದರೆ? ಯಾವಾಗ ಬರುವರಂತೆ ಛಂದಕಾ?

ಛಂದಕ: ಹೇಳಲಾರೆ ಅಮ್ಮ........ ಅವರು ಭಾರ್ಗವಾಶ್ರಮದ ಬಳಿ ಕಾಡಿನಲ್ಲಿ ಕೇಶಖಂಡನ ಮಾಡಿ, ಬೇಡನೊಬ್ಬನಿಂದ ಕಾಷಾಯ ವಸ್ತ್ರ ಪಡೆದು ಸನ್ಯಾಸ ಸ್ವೀಕರಿಸಿದರು.

ಯಶೋಧರೆ: ಹಾಯ್! ನನ್ನ ಪ್ರಿಯತಮ ಸಂಸಾರ ತ್ಯಾಗಿಯಾಗಿ ಸನ್ಯಾಸ ಸ್ವೀಕರಿಸಿದರೇ? ಅಯ್ಯೋ, ಕೇಳಲಾರೆ! (ಕಿವಿ ಮುಚ್ಚಿಕೊಂಡು ಮೂರ್ಛಿತಳಾಗುವಳು.)

ಪ್ರಜಾಪತಿದೇವಿ: ಯಶೋಧರಾ! (ಉಪಚರಿಸುವಳು.)

ಯಶೋಧರೆ: (ಏಳುತ್ತಾ) ಅಯ್ಯೋ ಪ್ರಿಯತಮಾ! ನಿನ್ನ ಸಹ ಧರ್ಮಿಣಿಯೂ ಅನಾಥೆಯೂ ಆದ ನನ್ನನ್ನು ಬಿಟ್ಟುಹೋಗಿ ಒಬ್ಬನೇ ಸಾಧಿಸುವ ಧರ್ಮವಾದರೂ ಅವುದು? ಹಿರಿಯರೆಲ್ಲರೂ ತಮ್ಮ ಪತ್ನಿಯೊಂದಿಗೆ ಕಾಡಿಗೆ ತೆರಳಿಡುದಲ್ಲವೇ? ಅತ್ತೆಮ್ಮಾ, ಅವರೊಬ್ಬರೇ ಅಲ್ಲಿ ಸಾಧಿಸುವ ಧರ್ಮವಾದರೂ ಯಾವುದು?

ಪ್ರಜಾಪತೀದೇವಿ: ಮಗೂ, ಇದೆಲ್ಲಾ ನಮ್ಮ ದುರ್ದೈವವೆಂದೇ ಹೇಳಬೇಕು. ಅಚ್ಚುಕಪ್ಪಾಗಿ ಅತ್ಯಂತ ಮೃದುವಾಗಿ ಬೆಳೆದಿದ್ದ ಕುರುಳುಗಳು ಆತನ ಮುಖಕ್ಕೆ ಎಷ್ಟು ಮನೋಹರವಾಗಿದ್ದವು! ಯಶೋಧರಾ! ಹೂಗಳಂತೆ ಮೃದುವಾಗಿರುವ ಆತನ ಹಜ್ಜೆಗಳನ್ನು ಕಠಿಣ ಕಾಡುನೆಲದಲ್ಲಿ ಅವನೆಂತು ಊರುವನು? ಅಸಂಖ್ಯಾತ ಮಂದಿಗೆ ಅನ್ನಪಾನಮಾಡಿದ ಕುಮಾರನು ಭಿಕ್ಷದ ಕೂಳಿಗೆ ಕೈಯೊಡ್ಡಬೇಕಾಯಿತೆ? (ಇದನ್ನು ಕೇಳುತ್ತಿದ್ದಂತೆ ಯಶೋಧರೆ ಬಿಕ್ಕಿ ಬಿಕ್ಕಿ ಅಳುವಳು.) ಚಿನ್ನದ ಮಂಚದಮೇಲೆ ಸುಪ್ಪತ್ತಿಗೆಯಲ್ಲಿ ಮಲಗಿದ್ದು ದೂರದ ವೀಣಾನಾದದಿಂದ ಕೂಡಾ ನಿದ್ರಾಭಂಗ ಹೊಂದುತ್ತಿದ್ದ ಸುಕುಮಾರನು ಬರಿಯ ನೆಲದ ಮೇಲೆ ಏಕವಸ್ತ್ರ

ಥಾರಿಯಾಗಿ ಕಾಡುಮೃಗಗಳ ಮಧ್ಯೆ ನಿದ್ರೆಮಾಡುವ ಬಗೆ ಎಂತು? ಅಯ್ಯೋ! ನಮ್ಮಗಳ ದುರ್ವಿಧಿಯೇ! (ಅಳುವಳು.)

(ಯಶೋಧರೆ ಅತ್ತೆಯನ್ನು ಅಪ್ಪಿಕೊಂಡು)

ಯಶೋಧರೆ: ಪ್ರಿಯನೇ ನನಗೆ ಸ್ವರ್ಗ! ಬೇರೆ ಸ್ವರ್ಗವೇತಕ್ಕೆ ನನಗೆ? ಆತನ ನಗುಮುಖವನ್ನು ನೋಡುವ ಭಾಗ್ಯವಿಲ್ಲದ ನಾನೇತಕ್ಕೆ ಜೀವಿಸಲಿ? ನಾನೊಬ್ಬಳು ಹತಭಾಗಿನಿ. ತಂದೆಯ ತೊಡೆಯನ್ನೇರಲಿಕ್ಕಿಲ್ಲದ ನನ್ನ ರಾಹುಲನೊಬ್ಬ ಹತಭಾಗ್ಯ. ಹಗೆಗಳೂ ಪ್ರೀತಿಯಿಂದ ಲಾಲಿಸು ವಂತಹ ರಾಹುಲನ ಮುದ್ದು ಮಾತುಗಳನ್ನು ಕೇಳುವ ಯೋಗವು ನನ್ನ ಪ್ರಾಣೇಶ್ವರನಿಗೆ ಇಲ್ಲದಾಯಿತೆ? ನನ್ನ ಹೃದಯವು ಕಲ್ಲಿಗಿಂತ ಕಠಿಣ! ಇದು ಒಡೆದು ಹೋಗಬಾರದೇ?

(ಮಹಾರಾಜ ಮತ್ತು ಮಂತ್ರಿಗಳು ಬರುವರು. ಮಂತ್ರಿಯ ಕೈಯಲ್ಲಿ ಹೂವಿನ ತಟ್ಟೆ ಇರುತ್ತದೆ.)

ಪ್ರಜಾಪತೀದೇವಿ: ಯಶೋಧರಾ! ಉಕ್ಕಿಬರುತ್ತಿರುವ ಶೋಕದ ಆವೇಗವನ್ನು ಸ್ವಭಾವಧೀರೆಯಾದ ನೀನು ಸಹಿಸಿಕೊಳ್ಳಬೇಕವ್ವ.

ಯಶೋಧರೆ: ನನ್ನ ಪ್ರಾಣವಲ್ಲಭನನ್ನು ಅಗಲಿದ ಆ ವಿರಹವೇದನೆ ಯನ್ನು ನಾನೆಂತು ಸಹಿಸಲಿ?

ಶುದ್ಧೋದನ: ಅಮಾತ್ಯರೇ, ಇದೇನೀ ಆರ್ತಾಲಾಪ? ಏನೋ ಅಮಂಗಳ ಕಾದಿದೆಯೆಂದು ತೋರುತ್ತಿದೆ. ಯಾರು? ಛಂದಕನೇ? ನನ್ನ ಕುಮಾರನೆಲ್ಲಿ? ಹೇಳು, ಬೇಗ ಹೇಳು.

ಛಂದಕ: (ಅಳುತ್ತಾ) ಅವರು ಸರ್ವಸಂಗಪರಿತ್ಯಾಗಿಗಳಾಗಿ ಕೇಶ ಖಂಡನ ಮಾಡಿ, ಕಾಷಾಯವಸ್ತ್ರ ಧರಿಸಿ, ಜರಾಮರಣನಾಶನಾರ್ಥವಾಗಿ ತಪೋವನಕ್ಕೆ ತೆರಳಿದರು. ನಾನು ಎಷ್ಟೆಂದರೂ ಕೇಳಲಿಲ್ಲ. (ಕೇಳು ತ್ತಿದ್ದಂತೆ ಶುದ್ಧೋದನನ ಕಣ್ಣಲ್ಲಿ ನೀರು ಉಕ್ಕಿಬರುತ್ತದೆ.) ಕೋಪದಿಂ ದಾಗಲೀ, ಸ್ವರ್ಗಾಪೇಕ್ಷೆಯಿಂದಾಗಲೀ, ಪಿತೃಭಕ್ತಿಯಿಲ್ಲದಯಾಗಲೀ, ಅವರು ಕಾಡಿಗೆ ಹೊರಟಿಲ್ಲವಂತೆ. ಶೋಕತ್ಯಾಗಕ್ಕಾಗಿಯೇ ಹೊರಟಿರುವ ಅವರಿಗಾಗಿ ಯಾರೂ ಶೋಕಿಸಕೂಡದಂತೆ. ತಮ್ಮಿಂದ ರಾಜ್ಯವನ್ನು ಸ್ವೀಕರಿಸಿ ಅರ್ಥದಾಯಾದನೆನಿಸುವುದಕ್ಕಿಂತ ಶುದ್ಧಾತ್ಮರಾದ ತಮ್ಮ ಧರ್ಮ ವೃತ್ತಿಯನ್ನೇ ಅನುಕರಣ ಮಾಡಿ ಧರ್ಮದಾಯಾದರೆನಿಸಲು ವನಪ್ರವೇಶ

ಮಾಡಿರುವರಂತೆ. ತಪೋವೃತ್ತಿಗೆ ಇದು ಸಕಾಲವಲ್ಲದಿದ್ದರೂ ಚಂಚಲವಾದ ಮಾನವಜೀವನದಲ್ಲಿ ಧರ್ಮಾಚರಣೆಗೆ ಅಕಾಲವೆಂಬುದೇ ಇಲ್ಲ. ಶ್ರೇಯಸ್ಸಾಧನೆಗೆ ಅವರಿಗೆ ಇದೇ ಸಕಾಲವೆಂದು ತಿಳಿದು, ಅವರು ರಾಜಧಾನಿಯನ್ನು ಬಿಟ್ಟಿರುವರಂತೆ. ಮರಣದ ಹೆದರಿಕೆಯು ಯಾವತ್ತೂ ನಮ್ಮ ಮನಸ್ಸನ್ನು ಆವರಿಸಿ ಮೃತ್ಯುವು ಸಿದ್ಧವಾಗಿರುವಲ್ಲಿ ಜೀವನದಲ್ಲಿ ನಂಬಿಕೆಯಿಡುವ ದಾರಿತೋರದೆ ಅವರು ಅರಮನೆ ಬಿಟ್ಟಿರುವರಂತೆ. ಇದಿಷ್ಟು ಅವರು ತಮ್ಮಲ್ಲಿ ಮಾಡಿಕೊಂಡ ವಿನಯಪೂರ್ವಕ ವಿಜ್ಞಾಪನೆಗಳು.

ಶುದ್ಧೋದನ: (ಧಾರಾಕಾರವಾಗಿ ಕಣ್ಣೀರು ಸುರಿಸುತ್ತ) ಹಾಯ್! ಪ್ರಿಯಕುವರಾ! ನನ್ನನ್ನಗಲಿ ಹೊರಟುಹೋಗಿ ಕಾನನವಾಸಿಯಾದೆಯಾ? ..........ದೇವಾ! ಶಾಖ್ಯವರ್ಧನಾ! ಕುಮಾರನು ರಾಜಧಾನಿಯಲ್ಲಿರಲೆಂದು ನಾನು ಮಾಡಿದ ಪ್ರಯತ್ನಗಳೆಲ್ಲಾ ನೀರಮೇಲಿನ ಹೋಮವಾಯಿತೇ? ನಾನು ಕಟ್ಟಿಕೊಂಡಿದ್ದ ಆಶಾಗೋಪುರಗಳೆಲ್ಲ ಕುಸಿದು ನೆಲಸಮವಾದುವೇ? ಅಯ್ಯೋ........ಪಾಪಿಷ್ಟನಾದ ನಾನು ಭಗ್ನಮನೋರಥನಾದೆನಲ್ಲಾ........ದಶರಥ ಮಹಾರಾಜಾ! (ಉನ್ಮತ್ತನಂತೆ]........ದಶರಥ ಮಹಾರಾಜಾ!........ನಿನ್ನ ಸುಪುತ್ರ ಶ್ರೀರಾಮಚಂದ್ರನ ವನವಾಸದ ದುಃಖವನ್ನು ಸಹಿಸಲಾರದೆ ಅಸುವನ್ನು ನೀಗಿದ ನೀನೇ ಧನ್ಯನು! ಆ ಅನರ್ಘ್ಯ ಭಾಗ್ಯವು ನನಗೆಲ್ಲಿಂದ ಬರುವುದು? ಪುಣ್ಯಮಯ ದಶರಥ! ಆ ಅನರ್ಘ್ಯ ಭಾಗ್ಯವು ನನಗೂ ಬೇಗನೆ ಬರಲಿ! ಕುವರಾ........ನನ್ನ ಮುದ್ದು ಕುವರನನ್ನು ಅಗಲಿದ ಈ ಅರಮನೆ, ಈ ಕಪಿಲವಸ್ತು ನಗರ,........ಈ ರಾಜ್ಯಕೋಶ........ಈ ಸಮಸ್ತ ರಾಜ್ಯಪರಿವಾರ........ಹಾಯ್!........ ಸಕಲವೂ ಶೂನ್ಯ........ ಶೂನ್ಯ........ಹಾಯ್!........ ಕುಮಾರ........ ಕಂ........ಠೀ........ರವ........

(ಮೂರ್ಛಿತನಾಗಿ ಬೀಳುವನು.)

— ಸಂಪೂರ್ಣಂ. —

